

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಸಂಖ್ಯೆ : 220(238)

ಸದಸ್ಯರ ಹೆಸರು : ಶ್ರೀ ಹೆಚ್.ಎಂ.ರಮೇಶ್ ಗೌಡ ( ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸುವ ದಿನಾಂಕ : 04.03.2020

ಉತ್ತರಿಸುವ ಸಚಿವರು : ಮಾನ್ಯ ಕೃಷಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕೃಷಿಯನ್ನು ಉತ್ತೇಜಿಸಲು ಸರ್ಕಾರ ಯಾವ ಯಾವ ಕಾರ್ಯಕ್ರಮಗಳನ್ನು ರೂಪಿಸಿದೆ;(ವಿವರ ನೀಡುವುದು) | ರಾಜ್ಯದಲ್ಲಿ ಕೃಷಿಯನ್ನು ಉತ್ತೇಜಿಸಲು ಸರ್ಕಾರ ರೂಪಿಸಿರುವ ಕಾರ್ಯಕ್ರಮಗಳ ವಿವರಗಳನ್ನು **ಅನುಬಂಧ-1** ರಲ್ಲಿ ನೀಡಿದೆ. |
| ಆ) | ರೈತರಿಗೆ ಯಾವ ಯಾವ ಕೃಷಿ ಉಪಕರಣಗಳನ್ನು ಕೊಳ್ಳಲು ಎಷ್ಟೆಷ್ಟು ಪ್ರೋತ್ಸಾಹ ಧನ ನೀಡಲಾಗುತ್ತಿದೆ: (ವಿವರ ನೀಡುವುದು) | ಕೃಷಿ ಯಾಂತ್ರೀಕರಣ ಕಾರ್ಯಕ್ರಮದಡಿ ರೈತರಿಗೆ ಸಣ್ಣ ಟ್ರ್ಯಾಕ್ಟರ್, ಪವರ್ ಟಿಲ್ಲರ್, ಭೂಮಿ ಸಿದ್ಧತೆ ಉಪಕರಣಗಳು, ಬಿತ್ತನೆ/ನಾಟಿ ಮಾಡುವ ಉಪಕರಣಗಳು, ಸಸ್ಯ ಸಂರಕ್ಷಣಾ ಉಪಕರಣಗಳು, ಅಂತರ ಬೇಸಾಯ ಉಪಕರಣಗಳು, ತ್ಯಾಜ್ಯ ನಿರ್ವಹಣಾ ಉಪಕರಣಗಳು, ಡೀಸಲ್ ಪಂಪ್‌ಸೆಟ್, ಕಬ್ಬು ಕಟ್ಟಾವು ಯಂತ್ರ, ಕೊಯ್ಲು ಮತ್ತು ಕೊಯ್ಲೋತ್ತರ ಸಂಸ್ಕರಣಾ ಉಪಕರಣಗಳನ್ನು ಸಹಾಯಧನದಡಿ ಒದಗಿಸಲಾಗುತ್ತಿದೆ.<br>ಸಾಮಾನ್ಯ ವರ್ಗದ ರೈತರಿಗೆ ಶೇ.50 ರಷ್ಟು ಸಹಾಯಧನ ಹಾಗೂ ಪರಿಶಿಷ್ಠ ಜಾತಿ ಹಾಗೂ ಪರಿಶಿಷ್ಠ ವರ್ಗದ ರೈತರಿಗೆ ಶೇ.90 ರಷ್ಟು ಸಹಾಯಧನವನ್ನು ಗರಿಷ್ಠ ರೂ.1.00ಲಕ್ಷದ ಮಿತಿಯೊಳಗೆ ನೀಡಲಾಗುತ್ತದೆ. |

| | | |
|---|---|---|
| | | 25 ಹೆಚ್ ಪಿ ಸಣ್ಣ ಟ್ರ್ಯಾಕ್ಟರ್ (Upto 25HP PTO) ಗಳಿಗೆ ಸಾಮಾನ್ಯ ವರ್ಗದ ರೈತರಿಗೆ ರೂ. 0.75 ಲಕ್ಷ ಸಹಾಯಧನ ಹಾಗೂ ಪರಿಶಿಷ್ಠ ಜಾತಿ ಹಾಗೂ ಪರಿಶಿಷ್ಠ ವರ್ಗದ ರೈತರಿಗೆ ರೂ.3.00 ಲಕ್ಷ ಸಹಾಯಧನವನ್ನು ನೀಡಲಾಗುತ್ತಿದೆ.<br>ಪ್ರಸುತ ರಾಜ್ಯದಲ್ಲಿ ನೀಡಲಾಗುತ್ತಿರುವ ಸಹಾಯಧನವನ್ನು ವಿವರಗಳನ್ನು **ಅನುಬಂಧ-2**ರಲ್ಲಿ ನೀಡಲಾಗಿದೆ. |
| ಇ) | ಸರ್ಕಾರದಿಂದ ನೀಡುವ ಪ್ರೋತ್ಸಾಹ ಧನ ರೈತರಿಗೆ ತಲುಪಿದೆಯೇ: ಇಲ್ಲದಿದ್ದಲ್ಲಿ ಯಾವ ಕಾಲಮಿತಿಯೊಳಗೆ ಪ್ರೋತ್ಸಾಹ ಧನವನ್ನು ತಲುಪಿಸಲು ವ್ಯವಸ್ಥೆ ಮಾಡಲಾಗುವುದು? | ಹೌದು. |

ಸಂಖ್ಯೆ:AGRI-AML-43/2020

(ಬಿ.ಸಿ.ಪಾಟೀಲ್) 2/3/20

ಕೃಷಿ ಸಚಿವರು

## ಅನುಬಂಧ -1 ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:238

ಕೃಷಿ ಇಲಾಖೆ: 1) ಮಣ್ಣು ಆರೋಗ್ಯ ಕಾರ್ಯಕ್ರಮ: ರಾಜ್ಯದಲ್ಲಿ ಕೃಷಿ ಹಿಡುವಳಿ ಹೊಂದಿರುವ ಎಲ್ಲಾ ರೈತರಿಗೆ ಮಣ್ಣು ಪರೀಕ್ಷೆ ಶಿಫಾರಸ್ಸುಗಳನ್ನು ಒಳಗೊಂಡ ಮಣ್ಣು ಆರೋಗ್ಯ ಚೀಟಿಗಳನ್ನು ವಿತರಿಸಲಾಗುತ್ತಿದೆ. ಮಣ್ಣು ಆರೋಗ್ಯ ಚೀಟಿ ಶಿಫಾರಸ್ಸಿನ ಅನ್ವಯ ಪ್ರಾತ್ಯಕ್ಷಿಕೆಗಳನ್ನು ಕೈಗೊಳ್ಳಲು ರಿಯಾಯಿತಿ ದರದಲ್ಲಿ ರಸಗೊಬ್ಬರ, ಸಾವಯವ ಗೊಬ್ಬರ, ಜೈವಿಕ ಗೊಬ್ಬರ, ಲಘುಪೋಷಕಾಂಶ ಮಣ್ಣು ಸುಧಾರಕಗಳನ್ನು ಗರಿಷ್ಟ ರೂ.2500/-(ಒಂದು ಹೇಕ್ಟೇರಿಗೆ) ಸಹಾಯಧನ ನೀಡಲಾಗುತ್ತದೆ. ಈ ಕಾರ್ಯಕ್ರಮವನ್ನು ಕೇಂದ್ರ ಸರ್ಕಾರದ ಮಾರ್ಗಸೂಚಿಯಂತೆ ಮೊದಲು ಮಾದರಿ ಗ್ರಾಮಗಳಲ್ಲಿ ಮಾತ್ರ ಅನುಷ್ಠಾನಗೊಳಿಸಲಾಗುತ್ತಿದೆ. ಇದಲ್ಲದೆ, ಗ್ರಾಮ ಮಟ್ಟದ ಮಣ್ಣು ಪರೀಕ್ಷಾ ಘಟಕಗಳನ್ನು ಸ್ಥಾಪಿಸಲು ಶೇ.75ರ ಸಹಾಯಧನ (ರೂ.3.75ಲಕ್ಷ) ನೀಡಲಾಗುತ್ತಿದೆ.

2) ರಾಷ್ಟ್ರೀಯ ಆಹಾರ ಸುರಕ್ಷತಾ ಅಭಿಯಾನ: ಯೋಜನೆಯು ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಯೋಜನೆಯಡಿ ಬತ್ತ, ದ್ವಿದಳಧಾನ್ಯ, ನ್ಯೂಟ್ರಿ ಸಿರಿಧಾನ್ಯ, ಎಣ್ಣೆಕಾಳು, ಕಬ್ಬು ಮತ್ತು ಹತ್ತಿ ಬೆಳೆಗಳ ಉತ್ಪಾದನೆಯನ್ನು ಹೆಚ್ಚಿಸಲು ಆಧುನಿಕ ತಾಂತ್ರಿಕತೆಗಳ ಗುಚ್ಛ ಪ್ರಾತ್ಯಕ್ಷಿಕೆಗಳನ್ನು ಆಯೋಜಿಸುವುದರ ಜೊತೆಗೆ ಬತ್ತ, ದ್ವಿದಳಧಾನ್ಯ, ನ್ಯೂಟ್ರಿ ಸಿರಿಧಾನ್ಯ ಉತ್ಪಾದನೆಗೆ ಬಿತ್ತನೆ ಬೀಜ, ಲಘು ಪೋಷಕಾಂಶಗಳು, ಜೈವಿಕ ಗೊಬ್ಬರಗಳು, ಸಸ್ಯ ಸಂರಕ್ಷಣಾ ರಾಸಾಯನಿಕಗಳು, ಜಿಪ್ಸಂ/ ಕೃಷಿ ಸುಣ್ಣ, ಕೃಷಿ ಉಪಕರಣಗಳು, ತುಂತುರು ನೀರಾವರಿ ಘಟಕಗಳ ಅಳವಡಿಕೆಗೆ ಶೇ.50ರ ಸಹಾಯಧನವನ್ನು ನೀಡಲಾಗುತ್ತದೆ. ಇದಲ್ಲದೆ, ದೃಢೀಕೃತ ಬಿತ್ತನೆ ಬೀಜದ ಉತ್ಪಾದನೆಯನ್ನು ಪ್ರೋತ್ಸಾಹಿಸಲು ದ್ವಿದಳಧಾನ್ಯ ಬೆಳೆಗಳಲ್ಲಿ ಪ್ರತಿ ಕ್ವಿಂಟಾಲಿಗೆ ರೂ.5000/- ಮತ್ತು ಸಿರಿಧಾನ್ಯಗಳಿಗೆ ರೂ.3000/- ಪ್ರೋತ್ಸಾಹ ಧನ ನೀಡಲಾಗುತ್ತದೆ.

3) ಬಿತ್ತನೆ ಬೀಜಗಳ ಪೂರೈಕೆ: ಈ ಯೋಜನೆಯಡಿ ಸಾಮಾನ್ಯ ವರ್ಗದ ರೈತರಿಗೆ ಶೇ. 50 ಹಾಗೂ ಪರಿಶಿಷ್ಟ ಜಾತಿ/ ಪಂಗಡದ ರೈತರಿಗೆ ಶೇ.75 ರ ರಿಯಾಯಿತಿ ದರದಲ್ಲಿ ಭತ್ತ, ರಾಗಿ, ಜೋಳ, ಮುಸುಕಿನ ಜೋಳ, ಸಜ್ಜೆ, ತೊಗರಿ, ಕಡಲೆ, ಹೆಸರು, ಉದ್ದು, ಅಲಸಂದೆ, ನೆಲಗಡಲೆ, ಸೂರ್ಯಕಾಂತಿ, ಸೋಯಾ ಅವರೆ, ಹತ್ತಿ ಇತ್ಯಾದಿ ಬೆಳೆಗಳ ಪ್ರಮಾಣಿತ/ ನಿಜ ಚೀಟಿ ಬಿತ್ತನೆ ಬೀಜಗಳನ್ನು ವಿತರಣೆ ಮಾಡಲಾಗುವುದು.

4) ಸಸ್ಯ ಸಂರಕ್ಷಣೆ: ಈ ಕಾರ್ಯಕ್ರಮದಡಿ ರಾಜ್ಯದಲ್ಲಿ ಬೆಳೆಯುವ ಕೃಷಿ ಬೆಳೆಗಳನ್ನು ಬಾಧಿಸುವ ಕೀಟ ರೋಗಗಳ ನಿರ್ವಹಣೆ ಹಾಗೂ ಸಂಗ್ರಹಿಸಿದ ಧಾನ್ಯಗಳನ್ನು ಕೀಟ-ರೋಗಗಳಿಂದ ಸಂರಕ್ಷಿಸಲು ತಾಂತ್ರಿಕತೆ/ ತಂತ್ರಜ್ಞಾನ ನೀಡುವುದು. ಇಲಾಖೆಯಲ್ಲಿ ಅನುಷ್ಠಾನಗೊಳಿಸುತ್ತಿರುವ ಬೀಜ, ರಸಗೊಬ್ಬರ ಮತ್ತು ಕೀಟನಾಶಕ ಕಾಯ್ದೆ ಮತ್ತು ಕಾನೂನು ಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲಾಗುವುದು. ವೈಜ್ಞಾನಿಕ ಧಾನ್ಯ ಸಂಗ್ರಹಣೆಗಾಗಿ ಸುಧಾರಿತ ಪೆಟ್ಟಿಗೆಗಳು, ಜೈವಿಕ ಪೀಡೆನಾಶಕಗಳು, ಸಸ್ಯ ಸಂರಕ್ಷಣಾ ಔಷಧಿಗಳು ಮತ್ತು ಉಪಕರಣಗಳನ್ನು ಸಾಮಾನ್ಯ ವರ್ಗದ ರೈತರಿಗೆ ಶೇ.50 ಹಾಗೂ ಪರಿಶಿಷ್ಟ ಜಾತಿ/ ಪಂಗಡದ ರೈತರಿಗೆ ಶೇ.75ರ ಸಹಾಯಧನವನ್ನು ನೀಡಲಾಗುತ್ತಿದೆ. ಇದಲ್ಲದೆ, ಬೀಜೋಪಚಾರ ಆಂದೋಲನ ಮತ್ತು ಸುರಕ್ಷಿತ ಕೀಟನಾಶಕಗಳ ಬಳಕೆ ಬಗ್ಗೆ ಎಲ್ಲಾ ರೈತರಿಗೆ ತರಬೇತಿಗಳನ್ನು ಆಯೋಜಿಸಲಾಗುತ್ತದೆ.

5) ಮಣ್ಣಿನ ಸತ್ವ ಹೆಚ್ಚಿಸುವಿಕೆ : ಮಣ್ಣಿನ ಫಲವತ್ತತೆ ಮತ್ತು ಬೆಳೆ ಉತ್ಪಾದಕತೆಯನ್ನು ಹೆಚ್ಚಿಸಲು ಜೈವಿಕ ಗೊಬ್ಬರಗಳು, ಲಘುಪೋಷಕಾಂಶಗಳು, ಜಿಪ್ಸಂ, ಕೃಷಿ ಸುಣ್ಣ/ಡೊಲೋಮೈಟ್, ಹಸಿರೆಲೆ ಗೊಬ್ಬರ ಬೀಜ, ಎರೆಹುಳು ಗೊಬ್ಬರ, ಸಾವಯವ ಗೊಬ್ಬರಗಳನ್ನು ಸಾಮಾನ್ಯ ವರ್ಗದ ರೈತರಿಗೆ ಶೇ.50 ಹಾಗೂ ಪರಿಶಿಷ್ಟ ಜಾತಿ/ ಪಂಗಡದ ರೈತರಿಗೆ ಶೇ.75ರ ಸಹಾಯಧನದಡಿ ನೀಡುವುದರ ಜೊತೆಗೆ ಬಯೋಡೈಜೆಸ್ಟರ್ ಘಟಕ ಮತ್ತು ಎರೆಹುಳು ಗೊಬ್ಬರ ಉತ್ಪಾದನೆ ಘಟಕ ಸ್ಥಾಪನೆಗೆ ಸಾಮಾನ್ಯ ವರ್ಗದ ರೈತರಿಗೆ ಶೇ.50 ಹಾಗೂ ಪರಿಶಿಷ್ಟ ಜಾತಿ/ ಪಂಗಡದ ರೈತರಿಗೆ ಶೇ.75ರ ಸಹಾಯಧನವನ್ನು ನೀಡಲಾಗುತ್ತಿದೆ

6) ಕೃಷಿ ಯಾಂತ್ರೀಕರಣ ಮತ್ತು ಕೃಷಿ ಸಂಸ್ಕರಣೆ : ಈ ಕಾರ್ಯಕ್ರಮದಡಿ ರೈತರು ಸಕಾಲದಲ್ಲಿ ಕೃಷಿ ಚಟುವಟಿಕೆಗಳನ್ನು ಕೈಗೊಳ್ಳಲು ಹಾಗೂ ಕೃಷಿ ಕಾರ್ಮಿಕರ ಮೇಲಿನ ಅವಲಂಬನೆಯನ್ನು ಕಡಿಮೆ ಮಾಡಲು ಕೃಷಿ ಯಂತ್ರೋಪಕರಣಗಳಿಗೆ ಸಹಾಯಧನ ಒದಗಿಸಲಾಗುವುದು (ಸಾಮಾನ್ಯ ವರ್ಗದ ರೈತರಿಗೆ ಶೇ. 50 ಮತ್ತು ಪರಿಶಿಷ್ಟ ಜಾತಿ/ ಪಂಗಡದ ರೈತರಿಗೆ ಶೇ.90) ಸಣ್ಣ ಟ್ರ್ಯಾಕ್ಟರ್ ಖರೀದಿಗೆ ಪರಿಶಿಷ್ಟ ಜಾತಿ/ ಪಂಗಡದ ರೈತರಿಗೆ ಸಣ್ಣ ಟ್ರ್ಯಾಕ್ಟರುಗಳಿಗೆ ರೂ.3.00ಲಕ್ಷ ಸಹಾಯಧನ ನೀಡಲಾಗುವುದು. ಕೃಷಿ ಸಂಸ್ಕರಣೆ ಘಟಕಗಳು ಮತ್ತು ಟಾರ್ಪಾಲೀನ್ ಗಳಿಗೆ ಸಾಮಾನ್ಯ ವರ್ಗದ

ರೈತರಿಗೆ ಶೇ. 50 ಮತ್ತು ಪರಿಶಿಷ್ಟ ಜಾತಿ/ ಪಂಗಡದ ರೈತರಿಗೆ ಶೇ.90ರ ಸಹಾಯಧನವನ್ನು ನೀಡಲಾಗುತ್ತದೆ.

7) ಕೃಷಿ ಯಂತ್ರಧಾರೆ: ರಾಜ್ಯದಲ್ಲಿ ಸಣ್ಣ ಮತ್ತು ಅತಿಸಣ್ಣ ರೈತರಿಗೆ ಸಕಾಲದಲ್ಲಿ ಕೃಷಿ ಚಟುವಟಿಕೆಗಳನ್ನು ಕೈಗೊಳ್ಳಲು ಅನುವಾಗುವಂತೆ, ಕಡಿಮೆ ಬಾಡಿಗೆ ದರದಲ್ಲಿ ಭೂಮಿ ಸಿದ್ಧತೆಯಿಂದ ಕೊಯ್ಲು ಮತ್ತು ಸಂಸ್ಕರಣೆಗೆ ಉಪಯುಕ್ತವಾಗುವ ವಿವಿಧ ಕೃಷಿ ಯಂತ್ರೋಪಕರಣಗಳನ್ನು ರೈತರಿಗೆ ಬಾಡಿಗೆ ಆಧಾರದ ಮೇಲೆ ಉಪಯೋಗಿಸಲು ಅವಕಾಶ ಕಲ್ಪಿಸಲು ಹೋಬಳಿ ಕೇಂದ್ರಗಳಲ್ಲಿ ಆಯ್ದ ಸಂಸ್ಥೆಗಳ ಸಹಯೋಗದೊಂದಿಗೆ ಕೃಷಿ ಯಂತ್ರಧಾರೆ (ಕೃಷಿ ಯಂತ್ರೋಪಕರಣ ಬಾಡಿಗೆ ಆಧಾರಿತ ಸೇವಾ) ಕೇಂದ್ರಗಳನ್ನು ತೆರೆಯಲಾಗಿರುತ್ತದೆ.

8) ಮುಖ್ಯಮಂತ್ರಿಯವರ ಸೂಕ್ಷ್ಮ ನೀರಾವರಿ ಯೋಜನೆ: ರಾಜ್ಯದಲ್ಲಿ ಲಭ್ಯವಿರುವ ನೀರನ್ನು ಸಮರ್ಥ ಮತ್ತು ಸಮರ್ಪಕ ಬಳಕೆಗೆ ಪ್ರೋತ್ಸಾಹಿಸಲು ಹಾಗೂ ಮಿತ ಬಳಕೆಯಿಂದ ಅಧಿಕ ಇಳುವರಿ ಪಡೆಯಲು ಹಾಗೂ ಸೂಕ್ಷ್ಮ (ಹನಿ/ತುಂತುರು) ನೀರಾವರಿ ಪದ್ಧತಿಯ ಅಳವಡಿಕೆಗೆ ಎಲ್ಲಾ ವರ್ಗದ ರೈತರಿಗೆ 2.0 ಹೆಕ್ಟೇರ್ ಪ್ರದೇಶದವರೆಗೆ ಶೇ.90 ರಷ್ಟು ಹಾಗೂ 2.0ಹೆಕ್ಟೇರಿಗಿಂತ ಮೇಲ್ಪಟ್ಟು 5.0ಹೆಕ್ಟೇರ್ ಪ್ರದೇಶದವರೆಗೆ ಶೇ.45ರ ಸಹಾಯಧನವನ್ನು ನೀಡಲಾಗುತ್ತಿದೆ.

9) ಕರಾವಳಿ ಪ್ಯಾಕೇಜ್: ಕರಾವಳಿ ಮತ್ತು ಮಲೆನಾಡಿನ ರೈತರನ್ನು ಉತ್ತಮವಾಗಿ ಬತ್ತ ಬೆಳೆಯುವುದನ್ನು ಪ್ರೇರೇಪಿಸಲು ಸುಧಾರಿತ ಬೇಸಾಯ ಕ್ರಮಗಳಾದ ನೇರ ಕೂರಿಗೆ ಬಿತ್ತನೆ/ ಡ್ರಂ ಸೀಡರ್ ನಿಂದ ಬಿತ್ತನೆ ಮತ್ತು ಯಾಂತ್ರೀಕೃತ ನಾಟಿ ಅಳವಡಿಸಿಕೊಂಡಿರುವ ರೈತರಿಗೆ ಪ್ರತಿ ಹೆಕ್ಟೇರಿಗೆ ರೂ.7500/-ಗಳ ಪ್ರೋತ್ಸಾಹಧನವನ್ನು ನೀಡಲಾಗುವುದು

10) ಸಾವಯವ ಕೃಷಿ ಮತ್ತು ಶೂನ್ಯ ಬಂಡವಾಳ ನೈಸರ್ಗಿಕ ಕೃಷಿ: ಸಾವಯವ ಭಾಗ್ಯ ಯೋಜನೆಯಡಿ ಸಾವಯವ ಕೃಷಿ ಪದ್ಧತಿಗೆ ಅಳವಡಿಸಿರುವ ಪ್ರದೇಶವನ್ನು ಸಾವಯವ ಗುಂಪು ಪ್ರಮಾಣೀಕರಣಕ್ಕೆ ಒಳಪಡಿಸಲು ಸಹಾಯಧನ ನೀಡಲಾಗುವುದು. ಸಾವಯವ ಕೃಷಿ ಮತ್ತು ಶೂನ್ಯ ಬಂಡವಾಳ ನೈಸರ್ಗಿಕ ಕೃಷಿ ಉತ್ಪನ್ನಗಳ ಸಂಗ್ರಹಣೆ, ಗ್ರೇಡಿಂಗ್, ಮೌಲ್ಯವರ್ಧನೆ, ಸಂಸ್ಕರಣೆ, ಬ್ರ್ಯಾಂಡ್ ಅಭಿವೃದ್ಧಿ, ಮಾರುಕಟ್ಟೆ, ಬಳಕೆದಾರರಲ್ಲಿ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗುವುದು. ಇದಲ್ಲದೆ, ಶೂನ್ಯ ಬಂಡವಾಳ ಕೃಷಿ ಉತ್ಪಾದನಾ ಪದ್ಧತಿಯನ್ನು ಕೃಷಿ ವಿಶ್ವವಿದ್ಯಾನಿಲಯಗಳ ಮೂಲಕ ವೈಜ್ಞಾನಿಕವಾಗಿ ಮೌಲ್ಯೀಕರಿಸಲು ಅನುದಾನವನ್ನು ಕಲ್ಪಿಸಲಾಗಿದೆ. ಮುಂದುವರೆದು,

ಶೂನ್ಯ ಬಂಡವಾಳ ನೈಸರ್ಗಿಕ ಕೃಷಿ ಪದ್ಧತಿಯನ್ನು ಅಳವಡಿಸುತ್ತಿರುವ ರೈತರಿಗೆ ಪೂರಕ ಘಟಕಗಳಾದ ನೆಲಹೊದಿಕೆಗೆ ದ್ವಿದಳಧಾನ್ಯ/ಹಸಿರೆಲೆ ಗೊಬ್ಬರ ಬೀಜ, ತೋಟಗಾರಿಕಾ ಬೆಳೆಗಳ ಸಸಿಗಳು, ತರಕಾರಿ ಬೀಜ, ಮೇವಿನ ಬೆಳೆ, ಬೀಜಾಮೃತ, ಜೀವಾಮೃತ ತಯಾರಿಕೆ, ನೆಲಹಾಸು, ಗಂಜಲ ಸಂಗ್ರಹಿಸುವ ತೊಟ್ಟಿ ಇತ್ಯಾದಿ ಘಟಕಗಳಿಗೆ ಶೇ. 90ರ ಸಹಾಯಧನ ನೀಡಲಾಗುವುದು.

**11)** ರೈತ ಸಿರಿ: ಈ ಕಾರ್ಯಕ್ರಮದಡಿ ರಾಜ್ಯದಲ್ಲಿ ಸಿರಿಧಾನ್ಯಗಳ ಉತ್ಪಾದನೆಯನ್ನು ಪ್ರೋತ್ಸಾಹಿಸಲು ಮತ್ತು ರೈತರ ಆದಾಯವನ್ನು ಹೆಚ್ಚಿಸಲು ಸಿರಿಧಾನ್ಯಗಳಾದ ನವಣೆ, ಹಾರಕ, ಕೊರಲೆ, ಸಾಮೆ, ಊದಲು ಬೆಳೆಗಳನ್ನು ಬೆಳೆದ ಎಲ್ಲಾ ವರ್ಗದ ರೈತರಿಗೆ ಪ್ರತಿ ಹೆಕ್ಟೇರಿಗೆ ರೂ.10000/-ದಂತೆ ಗರಿಷ್ಠ ಎರಡು ಹೆಕ್ಟೇರುಗಳಿಗೆ ಪ್ರೋತ್ಸಾಹಧನವನ್ನು ನೇರ ನಗದು ವರ್ಗಾವಣೆ ಮೂಲಕ ನೀಡಲಾಗುವುದು

**12)** ಕೃಷಿ ಭಾಗ್ಯ ಯೋಜನೆ: ರಾಜ್ಯದಲ್ಲಿ ಮಳೆಯಾಶ್ರಿತ ಕೃಷಿಯನ್ನು ಸುಸ್ಥಿರ ಕೃಷಿಯನ್ನಾಗಿ ರೂಪಾಂತರಗೊಳಿಸುವುದು ಹಾಗೂ ಸಮರ್ಪಕ ಮಳೆ ನೀರಿನ ಸಂಗ್ರಹಣೆ ಮತ್ತು ಉಪಯುಕ್ತ ಬಳಕೆ ಪದ್ಧತಿಯಿಂದ ಕೃಷಿ ಉತ್ಪಾದಕತೆಯನ್ನು ಉತ್ತಮಪಡಿಸಿ ಆದಾಯವನ್ನು ಹೆಚ್ಚಿಸುವುದು ಯೋಜನೆಯ ಉದ್ದೇಶವಾಗಿರುತ್ತದೆ. ಈ ಯೋಜನೆಯಡಿ ನೀರಿನ ಕೊಯ್ಲು ಮತ್ತು ಸಂಗ್ರಹಣೆಗೆ ಕೃಷಿ ಹೊಂಡ ನಿರ್ಮಾಣ ಮಾಡಲು, ಹೊಂಡಕ್ಕೆ ಪಾಲಿಥೀನ್ ಹೊದಿಕೆ ಅಳವಡಿಸಲು, ಹೊಂಡದಿಂದ ನೀರೆತ್ತುವ ಸಲುವಾಗಿ ಡೀಸೆಲ್ ಪಂಪುಸೆಟ್ಟು ಮತ್ತು ನೀರನ್ನು ಸಮರ್ಪಕವಾಗಿ ಬಳಸಲು ಹನಿ/ತುಂತುರು ನೀರಾವರಿ ಘಟಕಗಳ ಅಳವಡಿಕೆಗೆ ಹೊಂಡದ ಸುತ್ತ ನೆರಳು ಪರದೆ ಅಳವಡಿಕೆಗೆ ಸಹಾಯಧನ ನೀಡಲಾಗುತ್ತದೆ.

**13)** ಪ್ರಧಾನ ಮಂತ್ರಿ ಕಿಸಾನ್ ಸಮ್ಮಾನ್ ನಿಧಿ ಯೋಜನೆ: ಭಾರತ ಸರ್ಕಾರದ ಪ್ರಧಾನ ಮಂತ್ರಿ ಕಿಸಾನ್ ಸಮ್ಮಾನ್ ನಿಧಿ ಯೋಜನೆಯಡಿ ಸಾಗುವಳಿ ಭೂಮಿ ಹೊಂದಿರುವ ಎಲ್ಲಾ ಅರ್ಹ ರೈತರಿಗೆ ವಾರ್ಷಿಕರೂ. 6000/-ಗಳ ನಗದನ್ನು ರೂ.2000/-ಗಳಂತೆ ಮೂರು ಕಂತುಗಳಲ್ಲಿ ನಾಲ್ಕು ತಿಂಗಳಿಗೊಮ್ಮೆ ನೀಡಲಾಗುವುದು. ಕೇಂದ್ರ ಸರ್ಕಾರದ ಪಿ.ಎಂ.ಕಿಸಾನ್ ಯೋಜನೆಯ ಎಲ್ಲಾ ಅರ್ಹ ರೈತರಿಗೆ ದಿನಾಂಕ 14.08.2019 ರಿಂದ ರಾಜ್ಯ ಸರ್ಕಾರವು ಹೆಚ್ಚುವರಿಯಾಗಿ ರೂ.4000/ಗಳನ್ನು ಎರಡು ಕಂತುಗಳಲ್ಲಿ ಆರ್ಥಿಕ ನೆರವನ್ನು ಪಿ.ಎಂ.ಕಿಸಾನ್-ಕರ್ನಾಟಕ ಯೋಜನೆಯಡಿ ನೀಡಲಾಗುತ್ತಿದೆ.

14) ಕರ್ನಾಟಕ ರೈತ ಸುರಕ್ಷಾ ಪ್ರಧಾನ ಮಂತ್ರಿ ಫಸಲ್ ಬಿಮಾ ಯೋಜನೆ: ಈ ಯೋಜನೆಯಡಿ ಪ್ರಕೃತಿ ವಿಕೋಪಗಳು, ಕೀಟಗಳು ಮತ್ತು ರೋಗಗಳಿಂದಾಗಿ ಯಾವುದೇ ಅಧಿಸೂಚಿತ ಬೆಳೆ ವಿಫಲವಾದ ಪಕ್ಷದಲ್ಲಿ ರೈತರಿಗೆ ವಿಮಾ ರಕ್ಷಣೆ ಮತ್ತು ಹಣಕಾಸು ಬೆಂಬಲ ನೀಡಲಾಗುವುದು. ರೈತರಿಗೆ ನೀಡುವ ವಿಮಾ ಕಂತಿನ ರಿಯಾಯಿತಿಯಲ್ಲಿ ರಾಜ್ಯ ಸರ್ಕಾರದ ಪಾಲನ್ನು ನೀಡಿ ಬೆಳೆ ವಿಮಾ ನಷ್ಟ ಪರಿಹಾರವನ್ನು ಇತ್ಯರ್ಥಪಡಿಸಲು ಅನುವು ಮಾಡಲಾಗುವುದು.

15) ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ: ಈ ಯೋಜನೆಯು ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಇದರಡಿ ಕೃಷಿ ಮತ್ತು ಸಂಬಂಧಿಸಿದ ವಲಯಗಳಲ್ಲಿ ಹೆಚ್ಚಿನ ಸಾರ್ವಜನಿಕ ಹೂಡಿಕೆಗಾಗಿ ರಾಜ್ಯಗಳನ್ನು ಪ್ರೋತ್ಸಾಹಿಸಲಾಗುತ್ತದೆ. ಜಿಲ್ಲಾ ಕೃಷಿ ಯೋಜನೆಗಳಲ್ಲಿ ಸ್ಥಳೀಯ ಆದ್ಯತೆಗಳು / ಅವಶ್ಯಕತೆಗಳು/ ಬೆಳೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲು, ಹೊಸ ತಾಂತ್ರಿಕತೆಗಳನ್ನು ಅಳವಡಿಸಿ, ಮುಖ್ಯ ಬೆಳೆಗಳ ಉತ್ಪಾದಕತೆಯಲ್ಲಿ ಇರುವ ವ್ಯತ್ಯಯದ ಪ್ರಮಾಣವನ್ನು ಕಡಿತಗೊಳಿಸಲು, ಕೃಷಿ ಮತ್ತು ಸಂಬಂಧಿತ ವಲಯಗಳ ಎಲ್ಲಾ ಅವಶ್ಯಕತೆಗಳನ್ನು ತೆಗೆದುಕೊಂಡು ಉತ್ಪಾದನೆ/ ಉತ್ಪಾದಕತೆಯ ವಿವಿಧ ಘಟಕಗಳಲ್ಲಿ ಬದಲಾವಣೆ ತರಲು ಮತ್ತು ರೈತರಿಗೆ ಹೆಚ್ಚಿನ ಲಾಭಾಂಶ ದೊರಕಿಸಿಕೊಡಲು ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತದೆ. ಈ ಸಂಬಂಧ, ಕೃಷಿ ಮತ್ತು ಕೃಷಿ ಸಂಬಂಧಿತ ಇಲಾಖೆ/ ಸಂಸ್ಥೆಗಳಿಂದ ಕಾರ್ಯಕ್ರಮಗಳನ್ನು ಅನುಷ್ಠಾನ ಮಾಡಲಾಗುತ್ತದೆ.

16) ಕೃಷಿ ವಿಸ್ತರಣೆ ಉಪ ಅಭಿಯಾನ: ವಿಸ್ತರಣಾ ಸುಧಾರಣೆಗಳಿಗಾಗಿ ರಾಜ್ಯ ವಿಸ್ತರಣಾ ಕಾರ್ಯಕ್ರಮಗಳಿಗೆ ಬೆಂಬಲ ಯೋಜನೆಯು ವಿಸ್ತರಣಾ ಪದ್ಧತಿಯನ್ನು ರೈತರೇ ಮುನ್ನಡೆಸುವ ಹಾಗೂ ರೈತರಿಗೆ ಉತ್ತರದಾಯಿತ್ವವಾಗಬೇಕಾದ ಯೋಜನೆಯಾಗುವ ಗುರಿಯನ್ನು ಹೊಂದಿದೆ. ಭಾಗವಹಿಸುವಿಕೆ ಆಧಾರದ ಮೇಲೆ ವಿಸ್ತರಣಾ ಸುಧಾರಣೆಗಳನ್ನು ಜಾರಿಗೆ ತರಲು ಮತ್ತು ರೈತರಿಗೆ ತಂತ್ರಜ್ಞಾನವನ್ನು ಹೊಸ ಸಾಂಸ್ಥಿಕ ವ್ಯವಸ್ಥೆ ಮೂಲಕ ಪ್ರಸರಿಸುವ ಉದ್ದೇಶದಿಂದ ಜಿಲ್ಲಾ ಮಟ್ಟದಲ್ಲಿ ಕೃಷಿ ತಂತ್ರಜ್ಞಾನ ನಿರ್ವಹಣಾ ಸಂಸ್ಥೆ(ATMA)ಯನ್ನು ಅಸ್ತಿತ್ವಕ್ಕೆ ತರಲಾಗಿದೆ. ಈ ಯೋಜನೆಯಡಿಯಲ್ಲಿ ಭಾರತ ಸರ್ಕಾರ ನಿಗದಿಪಡಿಸಿರುವ ಮಾರ್ಗಸೂಚಿಯಂತೆ ಅಧಿಕಾರ/ ರೈತರ ತರಬೇತಿ, ಪರಿಚಯ ಪ್ರವಾಸ, ಪ್ರಾತ್ಯಕ್ಷಿಕೆ, ರೈತರ ಗುಂಪು ರಚನೆ, ಕೃಷಿ ಪಾಠಶಾಲೆ, ಕೃಷಿ ಮೇಳ, ಕ್ಷೇತ್ರೋತ್ಸವ ಇತ್ಯಾದಿ ಕಾರ್ಯಕ್ರಮಗಳನ್ನು ಅನುಷ್ಠಾನ ಮಾಡಲಾಗುತ್ತದೆ.

17) ಕೃಷಿ ಯಾಂತ್ರೀಕರಣ ಉಪ ಅಭಿಯಾನ: ಇದು ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಇದರ ಉದ್ದೇಶ ಕೃಷಿ ಯಂತ್ರೋಪಕರಣಗಳ ಬಳಕೆಯಿಂದ ಸಾಗುವಳಿ ವಿಸ್ತೀರ್ಣದಲ್ಲಿ ಯಾಂತ್ರೀಕೃತ ಶಕ್ತಿಯನ್ನು ಪ್ರತಿ ಹೆಕ್ಟೇರಿಗೆ 2.0ಕಿಲೋ ವ್ಯಾಟ್ ಗಳಷ್ಟು ಹೆಚ್ಚಿಸುವುದಾಗಿದೆ. ಇದರಡಿ ಕೃಷಿ ಯಂತ್ರೋಪಕರಣಗಳನ್ನು ಪಡೆಯಲು ಹಣಕಾಸಿನ ನೆರವು, ಬಾಡಿಗೆ ಆಧಾರಿತ ಸೇವಾ ಕೇಂದ್ರಗಳಿಗೆ ಯಂತ್ರೋಪಕರಣಗಳ ಬ್ಯಾಂಕ್/ ಹೈಟೆಕ್ ಸಮೃದ್ಧ ಪಕರಣಗಳ ಹಬ್ ಗಾಗಿ ಹಾಗೂ ಯಾಂತ್ರೀಕೃತ ಕಾರ್ಯಾಚರಣೆಯ ಪ್ರಚಾರಕ್ಕಾಗಿ ಹಣಕಾಸಿನ ನೆರವು ನೀಡಲಾಗುವುದು

18) ಬಿತ್ತನೆ ಬೀಜ ಉಪ ಅಭಿಯಾನ: ಈ ಯೋಜನೆಯಡಿ ಸರ್ಕಾರಿ ಸ್ವಾಮ್ಯದ ಸಂಸ್ಥೆಗಳ ಮೂಲಕ ರಾಜ್ಯ ಬೀಜೋತ್ಪಾದನಾ ಕೇಂದ್ರಗಳ ಬಲವರ್ಧನೆ, ಬೀಜ ಪರೀಕ್ಷಾ ಪ್ರಯೋಗಾಲಯಗಳ ಬಲವರ್ಧನೆ, ಬೀಜ ಪ್ರಮಾಣನಾ ಸಂಸ್ಥೆಗಳಿಗೆ ಬೆಂಬಲ, ಬೀಜೋಪಚಾರ ಇತ್ಯಾದಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುವುದು. ಈ ಯೋಜನೆಯನ್ನು ಸರ್ಕಾರಿ ಸ್ವಾಮ್ಯ ಸಂಸ್ಥೆಗಳು/ ರಾಜ್ಯ ಕೃಷಿ/ತೋಟಗಾರಿಕೆ ವಿಶ್ವವಿದ್ಯಾನಿಲಯಗಳಿಂದ ಅನುಷ್ಠಾನಗೊಳಿಸಲಾಗುವುದು

19) ಮಳೆಯಾಶ್ರಿತ ಪ್ರದೇಶ ಅಭಿವೃದ್ಧಿ: ಈ ಕಾರ್ಯಕ್ರಮದಡಿಯಲ್ಲಿ ಮಳೆಯಾಶ್ರಿತ ಪ್ರದೇಶದಲ್ಲಿ ರೈತರ ಕ್ಷೇತ್ರದಲ್ಲಿ ಸಮಗ್ರ ಕೃಷಿ ಪದ್ಧತಿಯನ್ನ ಪ್ರೋತ್ಸಾಹಿಸಲು ಬಹು ಬೆಳೆ ಪದ್ದತಿ, ಅಂತರ ಬೆಳೆ, ಮಿಶ್ರಬೆಳೆ (ಏಕದಳ ಧಾನ್ಯ, ದ್ವಿದಳಧಾನ್ಯ ಮತ್ತು ಎಣ್ಣೆಕಾಳು ಆಧಾರಿತ) ಪದ್ದತಿಗಳು, ತೋಟಗಾರಿಕೆ ಆಧಾರಿತ, ಪಶುಸಂಗೋಪನೆ ಆಧಾರಿತ, ಕೃಷಿ ಅರಣ್ಯ ಆಧಾರಿತ ಬೆಳೆ ಪದ್ಧತಿಗಳ ಅನುಷ್ಠಾನ, ಮಣ್ಣು ಮತ್ತು ನೀರು ಸಂರಕ್ಷಣಾ ಕ್ರಮಗಳು, ಮೌಲ್ಯವರ್ಧನೆ ಮತ್ತು ಸಂಪನ್ಮೂಲಗಳ ಸಂರಕ್ಷಣೆ ಮುಂತಾದ ಘಟಕಗಳನ್ನು ಅನುಷ್ಠಾನ ಮಾಡುವುದರ ಮೂಲಕ ರೈತರ ಆದಾಯವನ್ನು ಹೆಚ್ಚಿಸುವುದರ ಜೊತೆಗೆ ಬರ, ನೆರೆ ಮತ್ತು ಇತರೆ ಹವಾಮಾನ್ಯ ವೈಪರೀತ್ಯಗಳನ್ನು ಎದುರಿಸಲು ಸಜ್ಜುಗೊಳಿಸಲಾಗುತ್ತದೆ. ಸದರಿ ಯೋಜನೆಯನ್ನು ಜಲಾನಯನ ಅಭಿವೃದ್ಧಿ ಇಲಾಖೆ ವತಿಯಿಂದ ಅನುಷ್ಠಾನ ಮಾಡಲಾಗುತ್ತಿದೆ.

20) ಪರಂಪರಾಗತ ಕೃಷಿ ವಿಕಾಸ ಯೋಜನೆ: ಸಾವಯವ ಕೃಷಿಯಲ್ಲಿ ಪರಿಸರ ಸ್ನೇಹಿ ಉತ್ಪಾದನಾ ಮತ್ತು ಕಡಿಮೆ ವೆಚ್ಚದ ತಾಂತ್ರಿಕತೆ ಬಳಕೆ ಮಾಡಿಕೊಂಡು ಮಣ್ಣಿನ ಫಲವತ್ತತೆ ಕಾಪಾಡುವುದರೊಂದಿಗೆ ರಾಸಾಯನಿಕ ಉಳಿಕೆ ರಹಿತ, ಗುಣಮಟ್ಟದ ಸುರಕ್ಷಿತ ಆಹಾರದ ಉತ್ಪಾದನೆ ಮಾಡಬಹುದಾಗಿದೆ.

ಇದೇ ತತ್ವದ ಆಧಾರದ ಮೇಲೆ ಪರಂಪರಾಗತ ಕೃಷಿ ವಿಕಾಸ ಯೋಜನೆಯಡಿ ಗುಚ್ಛ ಮಾದರಿಯಲ್ಲಿ ಗ್ರಾಮಗಳನ್ನು ಆಯ್ಕೆ ಮಾಡಿಕೊಂಡು ಖಾತರಿ ವ್ಯವಸ್ಥೆ ಪ್ರಮಾಣೀಕರಣ ಪದ್ಧತಿಯನ್ನು ಅನುಸರಿಸಿ ಸಾವಯವ ಕೃಷಿ ಪದ್ಧತಿಯನ್ನು ಪ್ರೋತ್ಸಾಹಿಸುವುದು. ಸದರಿ ಯೋಜನೆಯನ್ನು ತೋಟಗಾರಿಕೆ ಇಲಾಖೆಯ ವತಿಯಿಂದ ಅನುಷ್ಠಾನ ಮಾಡಲಾಗುತ್ತಿದೆ.

21) ರಾಸಾಯನಿಕ ಗೊಬ್ಬರದ ಮೇಲಿನ ಬಡ್ಡಿ ಸಹಾಯಧನ: ಈ ಕಾರ್ಯಕ್ರಮದಡಿ ರಸಗೊಬ್ಬರಗಳನ್ನು ಮುಂಗಡವಾಗಿ ದಾಸ್ತಾನು ಮಾಡಲು ರಸಗೊಬ್ಬರ ಖರೀದಿಗೆ ರಾಷ್ಟ್ರೀಕೃತ ಬ್ಯಾಂಕುಗಳಿಂದ ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಂಡಳಿ ನಿಯಮಿತರವರು ಪಡೆದಿರುವ ಸಾಲದ ಮೇಲಿನ ಬಡ್ಡಿ, ರಸಗೊಬ್ಬರಗಳ ಶೇಖರಣಾ/ದಾಸ್ತಾನು ವೆಚ್ಚ, ರಸಗೊಬ್ಬರ ಹಮಾಲಿ, ಸಾಗಾಣಿಕೆ ಮತ್ತು ನಿರ್ವಹಣೆ ವೆಚ್ಚಗಳನ್ನು ಭರಿಸಲಾಗುವುದು

22) ಕೃಷಿ ಪ್ರಶಸ್ತಿ ಮತ್ತು ಕೃಷಿ ಪಂಡಿತ್ ಪ್ರಶಸ್ತಿ: ರಾಜ್ಯದ ರೈತರಲ್ಲಿ ಹೆಚ್ಚಿನ ಉತ್ಪಾದನೆ ಮಾಡುವ ಮನೋಭಾವ ಉಂಟುಮಾಡಲು ರಾಜ್ಯ, ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ ಸ್ಪರ್ಧೆಗಳನ್ನು ಏರ್ಪಡಿಸಿ ಬಹುಮಾನಗಳನ್ನು(ಕೃಷಿ ಪ್ರಶಸ್ತಿ) ನೀಡಲಾಗುವುದು. ಕೃಷಿ ಕ್ಷೇತ್ರದಲ್ಲಿ ಅಮೂಲ್ಯ ಅನ್ವೇಷಣೆ ಹಾಗೂ ಸೃಜನಾತ್ಮಕ ಕಾರ್ಯಗಳನ್ನು ಕೈಗೊಂಡ ರೈತರನ್ನು ಗುರುತಿಸಿ, ಅವರಿಗೆ ಕೃಷಿ ಪಂಡಿತ ಪ್ರಶಸ್ತಿಯನ್ನು ನೀಡಲಾಗುವುದು

23) ಬೆಳೆ ಸಾಲಕ್ಕೆ ಸಹಾಯಧನ: ಈ ಯೋಜನೆಯಡಿ ರಾಜ್ಯದ ರೈತರಿಗೆ ನೀಡಿದ ಬೆಳೆ ಸಾಲ/ಅಲ್ಪಾವಧಿ ಸಾಲವನ್ನು ನಿಗದಿತ ಅವಧಿಯೊಳಗೆ ಮರುಪಾವತಿ ಮಾಡಿದ ರೈತರಿಗೆ ಶೇ.1ರ ಬಡ್ಡಿ ರಿಯಾಯಿತಿಯನ್ನು(ಸರ್ಕಾರಿ ಸ್ವಾಮ್ಯದ ವಾಣಿಜ್ಯ ಬ್ಯಾಂಕುಗಳು ಹಾಗೂ ಪ್ರಾದೇಶಿಕ ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳ ಮೂಲಕ) ನೀಡಲಾಗುವುದು

24) ಕೃಷಿ ಬೆಲೆ ಆಯೋಗ: ಕೃಷಿ ಉತ್ಪನ್ನಗಳಿಗೆ ಉತ್ತಮ ಪ್ರತಿಫಲ ಬೆಲೆ ಒದಗಿಸಲು, ಮಾರುಕಟ್ಟೆ ಮೂಲ ಸೌಕರ್ಯವನ್ನು ಉತ್ತಮಗೊಳಿಸಲು, ಬೆಲೆ ಮತ್ತು ಬೆಲೇಯೇತರ ಕ್ರಮಗಳಿಂದ ಮಾರುಕಟ್ಟೆ ಸ್ಥಿರೀಕರಿಸಲು, ಹೆಚ್ಚಿನ ಉತ್ಪಾದನೆ ಸಮಯದಲ್ಲಿ ಮಾರುಕಟ್ಟೆ ಮಧ್ಯೆ ಪ್ರವೇಶ ಮಾಡಲು, ರೈತರಿಗೆ ಲಾಭದಾಯಕ ಬೆಲೆ ಪಡೆಯುವುದಕ್ಕಾಗಿ ಚೌಕಾಶಿ ಸಾಮರ್ಥ್ಯ ಮತ್ತು ಮಾರುಕಟ್ಟೆ ಸುಧಾರಣೆ, ಬೆಳೆ ವಿಮೆ, ಇ-ವ್ಯಾಪಾರ ಇತ್ಯಾದಿಗಳ ಬಗ್ಗೆ ಅಧ್ಯಯನ ಕೈಗೊಂಡು ಸರ್ಕಾರಕ್ಕೆ ಸಲಹೆ/ಶಿಫಾರಸ್ಸು ಮಾಡುವ ಸಲುವಾಗಿ ಕೃಷಿ ಬೆಲೆ ಆಯೋಗವನ್ನು ರಚಿಸಲಾಗಿರುತ್ತದೆ.

**25)** ಆಹಾರ ಸಂಸ್ಕರಣೆ ಮತ್ತು ಬಂಡವಾಳ ಹೂಡಿಕೆ: ಈ ಕಾರ್ಯಕ್ರಮದಡಿ ಆಹಾರ ಸಂಸ್ಕರಣೆಗೆ ಸಂಬಂಧಿಸಿದ ಚಟುವಟಿಕೆಗಳನ್ನು ಕೈಗೊಳ್ಳಲು ಸಹಾಯಧನ ನೀಡಲಾಗುತ್ತದೆ.

**26)** ಕೃಷಿ ಅಭಿಯಾನ- "ಇಲಾಖೆಗಳ ನಡಿಗೆ ರೈತರ ಬಾಗಿಲಿಗೆ"- ಈ ಕಾರ್ಯಕ್ರಮದಡಿ ಹೋಬಳಿ ಮಟ್ಟದಲ್ಲಿ ಕೃಷಿ ಮತ್ತು ಸಂಬಂಧಿಸಿದ ಇಲಾಖೆಗಳಾದ ಜಲಾನಯನ ಅಭಿವೃದ್ಧಿ, ತೋಟಗಾರಿಕೆ, ರೇಷ್ಮೆ, ಮೀನುಗಾರಿಕೆ, ಅರಣ್ಯ, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಗಳ ಸಮಗ್ರ ಕೃಷಿ ಮಾಹಿತಿ ಮತ್ತು ಈ ಎಲ್ಲಾ ಇಲಾಖೆಗಳಿಂದ ಅನುಷ್ಠಾನಗೊಳಿಸಲಾಗುತ್ತಿರುವ ವಿವಿಧ ಯೋಜನೆಗಳ ಮಾಹಿತಿಯನ್ನು ಏಕ ಗವಾಕ್ಷಿ ವಿಸ್ತರಣಾ ಪದ್ಧತಿಯಲ್ಲಿ ಪ್ರಚಾರ ನೀಡಲಾಗುವುದು.

**27)** ಕೃಷಿ ಮೇಳ ಮತ್ತು ವಸ್ತುಪ್ರದರ್ಶನ: ಇದರಡಿ ರೈತರಿಗೆ ಸುಧಾರಿತ ತಾಂತ್ರಿಕತೆಗಳನ್ನು ತಲುಪಿಸಲು ಸ್ಥಳೀಯ ಜಾತ್ರೆ ಮತ್ತು ವಿಶೇಷ ಸಂದರ್ಭಗಳಲ್ಲಿ ಇಲಾಖೆಗಳ ಚಟುವಟಿಕೆಗಳ ಕುರಿತು ಪರಿಣಾಮಕಾರಿಯಾಗಿ ಪ್ರಚುರಪಡಿಸಲು ವಸ್ತು ಪ್ರದರ್ಶನ/ ಕಾರ್ಯಾಗಾರ/ ಮೇಳ/ ಸಿಂಪೋಸಿಯಂಗಳನ್ನು ರಾಷ್ಟ್ರ, ಅಂತರ ರಾಜ್ಯ, ರಾಜ್ಯ, ಜಿಲ್ಲಾ, ತಾಲ್ಲೂಕು ಮಟ್ಟದಲ್ಲಿ ಮತ್ತು ಸ್ಥಳೀಯವಾಗಿ ಏರ್ಪಡಿಸಲಾಗುವುದು.

**28)** ಕೃಷಿ ವಾರ್ತಾ ಘಟಕ: ರಾಜ್ಯ, ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಕೃಷಿಗೆ ಸಂಬಂಧಿಸಿದ ವಿಸ್ತರಣಾ ಸಾಹಿತ್ಯಗಳು/ ಕೃಷಿ ಸಂಬಂಧಿತ ತಾಂತ್ರಿಕ ಪುಸ್ತಕ ಮುದ್ರಣ, ಆಕಾಶವಾಣಿ ಮತ್ತು ದೂರದರ್ಶನ ಕೇಂದ್ರಗಳ ಮೂಲಕ ನೇರ ಫೋನ್-ಇನ್ ಕಾರ್ಯಕ್ರಮಗಳು, ವಿವಿಧ ಮಾಧ್ಯಮಗಳ ಮೂಲಕ ಜಾಹೀರಾತು/ ಪ್ರಕಟಣೆ ಮತ್ತು ಇನ್ನಿತರೆ ಪ್ರಚಾರ ಕಾರ್ಯಗಳನ್ನು ಸದರಿ ಯೋಜನೆಯಡಿ ಕೈಗೊಳ್ಳಲಾಗುವುದು

**29)** ತರಬೇತಿ ಕಾರ್ಯಕ್ರಮಗಳು: ಈ ಯೋಜನೆಯಡಿ ಕೃಷಿ ವಿಸ್ತರಣಾ ಅಧಿಕಾರಿಗಳ ನಿರ್ವಹಣಾ ಸಾಮರ್ಥ್ಯ ಮತ್ತು ರೈತರ/ ರೈತ ಮಹಿಳೆಯರ ವೃತ್ತಿ ಸಾಮರ್ಥ್ಯವನ್ನು ಹೆಚ್ಚಿಸಲು ಕೃಷಿ ತಾಂತ್ರಿಕತೆಗಳಿಗೆ ಸಂಬಂಧಿಸಿದಂತೆ ವಿಶೇಷ ತರಬೇತಿಗಳನ್ನು ಹಾಗೂ ಅಧ್ಯಯನ ಪ್ರವಾಸಗಳನ್ನು ಆಯೋಜಿಸಲಾಗುವುದು.

**ಜಲಾನಯನ ಅಭಿವೃದ್ಧಿ ಇಲಾಖೆ:** ಜಲಾನಯನ ಅಭಿವೃದ್ಧಿ ಇಲಾಖಾ ವತಿಯಿಂದ ಬೆಂಗಳೂರು ನಗರ ಜಿಲ್ಲೆ ಹೊರತುಪಡಿಸಿ ಉಳಿದ ಜಿಲ್ಲೆಗಳಲ್ಲಿ ಕೃಷಿ ಕ್ಷೇತ್ರವನ್ನು ಉತ್ತೇಜಿಸಲು ಪ್ರಸ್ತುತ ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

1. ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ: ಈ ಯೋಜನೆಯು ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು 60:40ರ ಅನುಪಾತದಲ್ಲಿ ಅನುದಾನ ಒದಗಿಸಲಾಗುತ್ತಿದೆ.

ಅ) ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ-ಜಲಾನಯನ ಅಭಿವೃದ್ಧಿಗಳ ಮೂಲಕ ಮಣ್ಣು ಮತ್ತು ನೀರು ಸಂರಕ್ಷಣೆಗಾಗಿ ಕಂದಕ ಬದುಗಳು, ಬೋಲ್ಡರ್/ ರಬಲ್/ ಸಸ್ಯತಡೆಗಳು, ಕೃಷಿ ಹೊಂಡಗಳು, ಚಿಕ್ಕ ತಡೆ ಅಣೆಗಳು, ನಾಲಾಬದುಗಳು, ಖುಷ್ಕಿ ತೋಟಗಾರಿಕೆ, ಕೃಷಿ ಅರಣ್ಯ ಮತ್ತು ಮೇವು ಅಭಿವೃದ್ಧಿ ಮುಂತಾದ ಚಟುವಟಿಕೆಗಳನ್ನು ತಾಂತ್ರಿಕತೆ ಆಧರಿಸಿ ಅನುಷ್ಠಾನ ಮಾಡಲಾಗುತ್ತದೆ. ಈ ಚಟುವಟಿಕೆಗಳಿಂದ ಮಣ್ಣು ಮತ್ತು ನೀರಿನ ಸಂರಕ್ಷಣೆಯಾಗಿ ಬೆಳೆಗಳ ಉತ್ಪಾದಕತೆಯು ಹೆಚ್ಚಾಗುತ್ತದೆ.

ಯೋಜನಾ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಲ್ಲಿ ಭೂ ರಹಿತ ಮತ್ತು ಆರ್ಥಿಕವಾಗಿ ಹಿಂದುಳಿದ ಕುಟುಂಬಗಳ ಮಹಿಳೆಯರಿಗಾಗಿ ಸ್ವಸಹಾಯ ಗುಂಪುಗಳನ್ನು ರಚಿಸಲಾಗುತ್ತದೆ. ಸ್ವಸಹಾಯ ಗುಂಪಿನ ಸದಸ್ಯರಿಗೆ ಅಗತ್ಯ ತರಬೇತಿಗಳನ್ನು ನೀಡಿ ಆದಾಯ ಉತ್ಪನ್ನ ಚಟುವಟಿಕೆಗಳನ್ನು ಕೈಗೊಳ್ಳಲು ಸುತ್ತು ನಿಧಿಯನ್ನು ನೀಡಿ ಪ್ರೋತ್ಸಾಹ ನೀಡಲಾಗುತ್ತಿದೆ.

ಈ ಯೋಜನೆಯು 31.03.2020ಕ್ಕೆ ಮುಕ್ತಾಯವಾಗಲಿದೆ.

ಆ) ಪ್ರಧಾನಮಂತ್ರಿ ಕೃಷಿ ಸಿಂಚಾಯಿ ಯೋಜನೆ- ಇತರೆ ಉಪಚಾರಗಳು : ಈ ಯೋಜನೆಯಡಿ ಸಮುದಾಯ ನೀರು ಸಂಗ್ರಹಣಾ ವಿನ್ಯಾಸಗಳಾದ ತಡೆಅಣೆ, ನಾಲಾಬದು, ಕಿಂಡಿಅಣೆ, ಜಿನುಗುಕೆರೆ ಮತ್ತಿತ್ತರ ನೀರು ಸಂಗ್ರಹಣಾ ವಿನ್ಯಾಸಗಳನ್ನು ರಚಿಸಿ, ಸದರಿ ವಿನ್ಯಾಸಗಳನ್ನು ಸೂಕ್ಷ್ಮ ನೀರಾವರಿಗೆ ಅಳವಡಿಸುವುದರ ಮೂಲಕ ಬೆಳೆಗಳ ಸಂಧಿಗ್ದ ಪರಿಸ್ಥಿತಿಯಲ್ಲಿ ರಕ್ಷಣಾತ್ಮಕ ನೀರಾವರಿಗೆ ನೀರನ್ನು ಬಳಸಿ ಕೃಷಿ ಉತ್ಪಾದನೆ ಹೆಚ್ಚಿಸಲು ನೆರವಾಗುತ್ತದೆ.

2. ಕರ್ನಾಟಕ ಜಲಾನಯನ ಅಭಿವೃದ್ಧಿ ಕಾರ್ಯಕ್ರಮ -II(ಸುಜಲಾ-III): ವಿಶ್ವಬ್ಯಾಂಕ್ ನೆರವಿನ ಈ ಯೋಜನೆಯಡಿಯಲ್ಲಿ ಒಣ ಬೇಸಾಯ ಮಾಡುವ ರೈತರ ಹಿತ ಕಾಪಾಡಲು ವಿವಿಧ ಸಂಶೋಧನಾ

ಸಂಸ್ಥೆಗಳು ಅಭಿವೃದ್ಧಿಪಡಿಸಿದ ವೈಜ್ಞಾನಿಕ ಆಧಾರಿತ ಆವಿಷ್ಕಾರಗಳನ್ನು ಪ್ರಧಾನಮಂತ್ರಿ ಕೃಷಿ ಸಂಚಾಯಿ ಯೋಜನೆಯಡಿ ಅಳವಡಿಸಿ ಯೋಜನೆಯನ್ನು ಹೆಚ್ಚು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಮೂಲಕ ರೈತರಿಗೆ ಉತ್ಪಾದನೆ ಮತ್ತು ಆದಾಯ ಹೆಚ್ಚಿಸಲು ನೆರವಾಗುತ್ತಿದೆ. ಈ ಯೋಜನೆಯು 31.12.2019ಕ್ಕೆ ಮುಕ್ತಾಯವಾಗಿದೆ.

3. ರಾಷ್ಟ್ರೀಯ ಸುಸ್ಥಿರ ಕೃಷಿ ಅಭಿಯಾನ-ಮಳೆಯಾಶ್ರಿತ ಪ್ರದೇಶಾಭಿವೃದ್ಧಿ ಕಾರ್ಯಕ್ರಮ: NMSA-RAD ಕಾರ್ಯಕ್ರಮವನ್ನು ಮಳೆಯಾಶ್ರಿತ ಪ್ರದೇಶಗಳಲ್ಲಿ ಕನಿಷ್ಠ 100 ಹೆಕ್ಟೇರ್ ಪ್ರದೇಶದಲ್ಲಿ ಆಯ್ದ ಗುಚ್ಛ ಗ್ರಾಮಗಳಲ್ಲಿ ಅನುಷ್ಠಾನಗೊಳಿಸಲಾಗಿದೆ. ಈ ಕಾರ್ಯಕ್ರಮದಡಿ ಮಳೆಯಾಶ್ರಿತ ಪ್ರದೇಶಗಳಲ್ಲಿ ಸಮಗ್ರ ಕೃಷಿ ಪದ್ಧತಿಗಳನ್ನು ಅಳವಡಿಸಿಕೊಳ್ಳಲು ಪ್ರೋತ್ಸಾಹ ನೀಡುತ್ತದೆ. ಕೃಷಿ, ತೋಟಗಾರಿಕೆ, ಪಶು ಸಂಗೋಪನೆ, ಕೃಷಿ ಅರಣ್ಯ ಆಧಾರಿತ ಮಿಶ್ರ ಬೆಳೆ ಪದ್ಧತಿಗಳನ್ನು ಒಬ್ಬ ಫಲಾನುಭವಿಗೆ ಗರಿಷ್ಠ 2 ಹೆಕ್ಟೇರ್ ಪ್ರದೇಶ ಮೀರದಂತೆ ಅನುಷ್ಠಾನಗೊಳಿಸಲಾಗಿದೆ. ಇದರೊಂದಿಗೆ ಮೌಲ್ಯವರ್ಧಿತ ಚಟುವಟಿಕೆಗಳಾದ ಜೇನು ಸಾಕಾಣಿಕೆ, ಸೈಲೇಜ್ ಗುಂಡಿ, ಸಮುದಾಯ ಕೆರೆ, ನೀರು ಎತ್ತುವ ಯಂತ್ರಗಳು, ಎರೆಹುಳು ಸಾಕಾಣಿಕೆ, ನೀರು ಸಂರಕ್ಷಣಾ ಕಾಮಗಾರಿಗಳಾದ ಬದು ನಿರ್ಮಾಣ, ಕೃಷಿ ಹೊಂಡ ಹಾಗೂ ಇತರೆ ಚಟುವಟಿಕೆಗಳನ್ನು ಕೈಗೊಳ್ಳಲಾಗಿದೆ. ಈ ಎಲ್ಲಾ ಚಟುವಟಿಕೆಗಳಿಂದ ರೈತನ ಆದಾಯದಲ್ಲಿ ಸುಸ್ಥಿರತೆ ತರಲು ಸಾಧ್ಯವಾಗುತ್ತದೆ.

4. ಅ) ಸಮಸ್ಯಾತ್ಮಕ ಮಣ್ಣುಗಳ ಸುಧಾರಣೆ (**RPS**) : ನಿರ್ದಿಷ್ಠ ಅಗತ್ಯತೆ ಮತ್ತು ಸ್ಥಳಕ್ಕನುಗುಣವಾಗಿ ಕೃಷಿ ಅಭಿವೃದ್ದಿ, ವೈಜ್ಞಾನಿಕ ಇಂಜಿನಿಯರಿಂಗ್ ಕ್ರಮಗಳು, ವೈಜ್ಞಾನಿಕವಾಗಿ ರಸಗೊಬ್ಬರಗಳ ಬಳಕೆ, ಉಪ್ಪು ಸಹಿಷ್ಣ ಬೆಳೆ/ ಕೃಷಿ ಅರಣ್ಯೀಕರಣ ಪದ್ಧತಿಗಳನ್ನು ಅಳವಡಿಸಿ ಸಮಸ್ಯಾತ್ಮಕ ಮಣ್ಣುಗಳ ಸುಧಾರಣೆ/ ಅಭಿವೃದ್ಧಿ ಮೂಲಕ ಬೆಳೆ ಇಳುವರಿ ಹೆಚ್ಚಿಸುವುದು.

ಆ) ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ ಸಮಗ್ರ ಕೃಷಿ ಅಭಿವೃದ್ಧಿ (PPP-I**AD**)

ರಾಷ್ಟ್ರೀಯ ಕೃಷಿ ವಿಕಾಸ ಯೋಜನೆಯಡಿಯಲ್ಲಿ ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ ಕೃಷಿಯ ಉತ್ಪಾದನೆಯಿಂದ ಹಿಡಿದು ಬಳಕೆಯ ಹಂತದವರೆಗೂ ಸಂಪೂರ್ಣ ಮೌಲ್ಯವೃದ್ಧಿ ಸರಪಳಿಯನ್ನು ಸೂಕ್ತ ಮಧ್ಯಸ್ಥಿಕೆ /ತಾಂತ್ರಿಕತೆಗಳನ್ನು ಅಳವಡಿಸಿಕೊಳ್ಳುವುದರ ಮೂಲಕ ಕೃಷಿಯಲ್ಲಿ ಉತ್ಪಾದಕತೆಯನ್ನು ಹೆಚ್ಚಿಸುವುದು ಹಾಗೂ ಕೊಯ್ಲೋತ್ತರ ನಷ್ಟವನ್ನು ಕಡಿಮೆಗೊಳಿಸುವುದು ಈ ಯೋಜನೆಯ

ಉದ್ದೇಶವಾಗಿರುತ್ತದೆ. ಈ ಯೋಜನೆಯಿಂದ ರೈತರಿಗೆ ನೇರ ಮಾರುಕಟ್ಟೆ ಬೆಂಬಲವನ್ನು ನೀಡುವುದರ ಮೂಲಕ ಮಧ್ಯವರ್ತಿಗಳ ಹಾವಳಿಯನ್ನು ತಪ್ಪಿಸುವುದಲ್ಲದೆ, ರೈತÀರು ಉತ್ಪಾದಿಸುವ ಬೆಳೆಗಳಿಗೆ ಸರಿಯಾದ ಸಮಯದಲ್ಲಿ ಮಾರುಕಟ್ಟೆಯಿಂದ ಸೂಕ್ತ ಬೆಲೆಯನ್ನು ದೊರಕಿಸಿಕೊಡಲು ಸಹಾಯವಾಗುವುದು.

ಇ) ರೈತ ಉತ್ಪಾದಕರ ಸಂಸ್ಥೆ **(FPO )**

ರೈತ ಉತ್ಪಾದಕರ ಸಂಸ್ಥೆಗಳನ್ನು ಸ್ಥಾಪಿಸುವ ಮೂಲಕ ಸಣ್ಣ ಹಾಗೂ ಅತಿ ಸಣ್ಣ ರೈತರು ತಮ್ಮ ಉತ್ಪನ್ನಗಳನ್ನು ಮಾರುಕಟ್ಟೆ ಮಾಡುವಲ್ಲಿ ಒಬ್ಬಂಟಿಯಾಗಿ ಎದುರಿಸುವ ಹಲವಾರು ಸವಾಲುಗಳನ್ನು ಪರಿಹರಿಸಬಹುದು. ಉತ್ಪಾದಕರ ಸಂಸ್ಥೆಯಾಗಿ ರೈತ ಉತ್ಪಾದಕರ ಸಂಘವು ಸ್ಥಳೀಯ ರೈತ ಸಮುದಾಯದ ಸಂಧಾನ ಸಾಮರ್ಥ್ಯವನ್ನು ಹಾಗೂ ವ್ಯವಹಾರಿಕ ಪಾಲುದಾರಿಕೆಯನ್ನು ಅಭಿವೃದ್ಧಿಗೊಳಿಸುವ ಮೂಲಕ ರೈತರ ಆರ್ಥಿಕ ಹಾಗೂ ಔದ್ಯಮಿಕ ಸಂಭಾವ್ಯ ಶಕ್ತಿಯನ್ನು ಸಡಿಲಿಸುವಂತೆ ಮಾಡಬಹುದಾಗಿದೆ. ಈ ಸಂಸ್ಥೆಗಳಿಂದ ಉತ್ಪಾದಕರ ಬೇಡಿಕೆಗೆ ಅನುಗುಣವಾಗಿ ಹಾಗೂ ಮೌಲ್ಯ ಸರಪಳಿಯ ಪದ್ಧತಿಯನ್ನು ಅಳವಡಿಸುವ ಮೂಲಕ ಉತ್ಪಾದಕರ ಆರ್ಥಿಕ ಹಾಗೂ ಸಾಮಾಜಿಕ ಲಾಭಗಳನ್ನು ಹೆಚ್ಚಿಸುವ ಉದ್ದೇಶವನ್ನು ಹೊಂದಿದೆ.

5.ಜಲಾನಯನ ಅಭಿವೃದ್ಧಿ ಮೂಲಕ ಬರಗಾಲ ತಡೆಯುವಿಕೆ: 2019-20ನೇ ಸಾಲಿನಿಂದ ರಾಜ್ಯದ 100 ಬರಪೀಡಿತ ಮತ್ತು ಅಂತರ್ಜಲ ಶೋಷಿತ ತಾಲ್ಲೂಕುಗಳಲ್ಲಿ ಭೂಸಂಪನ್ಮೂಲ ಸಮೀಕ್ಷೆ ಮಾಹಿತಿ ಆಧರಿಸಿ ಹಾಗೂ MGNREGA ಮತ್ತು PMKSY ಯೋಜನೆಗಳೊಂದಿಗೆ ಒಗ್ಗೂಡಿಸಿ ಬರನಿರೋಧಕ ಜಲಾನಯನ ಚಟುವಟಿಕೆಗಳ ಅನುಷ್ಠಾನದ ಮೂಲಕ ಮಳೆಯಾಶ್ರಿತ ಜಲಾನಯನ ಪ್ರದೇಶದ ಉತ್ಪಾದಕತೆಯನ್ನು ಹೆಚ್ಚಿಸುವುದು ಹಾಗೂ ಆಸ್ತಿರಹಿತರಿಗೆ ಜೀವನೋಪಾಯ ಚಟುವಟಿಕೆಗಳನ್ನು ಅನುಷ್ಠಾನ ಮಾಡಲು ನೆರವು ನೀಡಲು ಸಹಾಯವಾಗುವುದು.

# ವಿಧಾನ ಪರಿಷತ್ತಿನ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 238ರ ಅನುಬಂಧ-2

## ಕೃಷಿ ಇಲಾಖೆಯಿಂದ ವಿತರಿಸಲಾಗುತ್ತಿರುವ ವಿವಿಧ ಯಂತ್ರೋಪಕರಣಗಳು ಹಾಗೂ ಅವುಗಳಿಗೆ ನಿಗಧಿಪಡಿಸಿದ ಗರಿಷ್ಠ ಸಹಾಯಧನದ ವಿವರಗಳು

| S. No. | Implement type | Implement Specifications | Subsidy Rates |
|---|---|---|---|
| 1 | Tractor | TRACTORS UPTO 25 PTO HP | Subsidy: General farmer:Rs.75000 ; SC&ST farmer:Rs.300000 |
| 2 | Power Tiller | POWER TILLERS-BELOW 8 BHP | Subsidy: General farmer: 50% or Max.of Rs.45600 ; SC&ST farmer:90% or Max. of Rs.82080 whichever is less |
| 3 | | POWER TILLERS-8 BHP AND ABOVE | Subsidy: General farmer:50% or Max.of Rs60000 ; SC&ST farmer:90% or Max. of Rs.100000 which ever is less |
| 4 | MB Plough | Single Bottom, Fixed 35 HP, 150 Kg | Subsidy: General farmer:50% or Max.of Rs.12600 ; SC&ST farmer:90% or Max. of Rs.22680 whichever is less |
| 5 | | Single Bottom, Fixed45HP, 175 Kg | Subsidy: General farmer:50% or Max.of Rs13365 ; SC&ST farmer:90% or Max. of Rs.24057whichever is less |
| 6 | | Single Bottom,Reversible, 35 HP, 235 Kg | Subsidy: General farmer:50% or Max.of Rs25000 ; SC&ST farmer:90% or Max. of Rs.45000 whichever is less |
| 7 | | Single Bottom, Reversible, 45 HP, 250 Kg | Subsidy: General farmer:50% or Max.of Rs20025 ; SC&ST farmer:90% or Max. of Rs.36045whichever is less |
| 8 | | Two Bottom, Fixed, 35 HP, 200Kg | Subsidy: General farmer:50% or Max.of Rs17000 ; SC&ST farmer:90% or Max. of Rs.30600 whichever is less |
| 9 | | Two Bottom, Fixed, 45 HP, 225Kg | Subsidy: General farmer:50% or Max.of Rs17950 ; SC&ST farmer:90% or Max. of Rs.32310whichever is less |
| 10 | | Two Bottom Reversible(Mechanical), 35HP, 350Kg | Subsidy: General farmer:50% or Max.of Rs28000 ; SC&ST farmer:90% or Max. of Rs.50400whichever is less |
| 11 | | Two Bottom, Reversible (Hydraulic), 35 HP, 450 kg | Subsidy: General farmer:50% or Max.of Rs42500 ; SC&ST farmer:90% or Max. of Rs.76500whichever is less |
| 12 | | Three Bottom,Fixed,40 HP, 250 kg | Subsidy: General farmer:50% or Max.of Rs18225 ; SC&ST farmer:90% or Max. of Rs.32805whichever is less |
| 13 | Tractor Operated Rotavator / Side Shift Rotavator | 540/1000 RPM, 60-90 Cm, 16-28 Blades, Chain/Gear | Subsidy: General farmer:50% or Max.of Rs21500 ; SC&ST farmer:90% or Max. of Rs.38700 whichever is less |
| 14 | | 540/1000 RPM, 115 Cm, 30 Blades, Chain/Gear | Subsidy: General farmer:50% or Max.of Rs44000 ; SC&ST farmer:90% or Max. of Rs.79200whichever is less |
| 15 | | 540/1000 RPM, 140 Cm, 36 Blades, Chain/Gear | Subsidy: General farmer:50% or Max.of Rs.47250 ; SC&ST farmer:90% or Max. of Rs.85050 whichever is less |
| 16 | | 540/1000 RPM, 170Cm, 42 Blades, Chain/Gear | Subsidy: General farmer:50% or Max.of Rs47500; SC&ST farmer:90% or Max. of Rs.85500 whichever is less |
| 17 | Rotary tiller for paddy cultivation / Rice harrow | 540/1000 RPM, 160Cm, 48 Blades, 45 HP, Chain/Gear | Subsidy: General farmer:50% or Max.of Rs47500 ; SC&ST farmer:90% or Max. of Rs.85500 whichever is less |
| 18 | | 540/1000 RPM, 180Cm, 54 Blades, 50 HP, Chain/Gear | Subsidy: General farmer:50% or Max.of Rs48500 ; SC&ST farmer:90% or Max. of Rs.87300 whichever is less |
| 19 | | 540/1000 RPM, 200Cm, 60 Blades, 55 HP, Chain/Gear | Subsidy: General farmer:50% or Max.of Rs52500; SC&ST farmer:90% or Max. of Rs.94500 whichever is less |
| 20 | Disc Plough | Two Disc Plough Minimum 35HP, 190Kg | Subsidy: General farmer:50% or Max.of Rs21500 ; SC&ST farmer:90% or Max. of Rs.38700 whichever is less |

| S. No. | Implement type | Implement Specifications | Subsidy Rates |
|---|---|---|---|
| 21 | Disc Plough | Two Disc Plough Minimum 35HP,290 Kg, | Subsidy: General farmer:50% or Max.of Rs21000 ; SC&ST farmer:90% or Max. of Rs.37800 whichever is less |
| 22 | | Two Disc Plough Minimum 35HP,225Kg, | Subsidy: General farmer:50% or Max.of Rs21500 ; SC&ST farmer:90% or Max. of Rs.38700 whichever is less |
| 23 | | Three Disc Plough Minimum 45HP, 310Kg, | Subsidy: General farmer:50% or Max.of Rs26808 ; SC&ST farmer:90% or Max. of Rs.48254 whichever is less |
| 24 | Tractor Drawn Disc Harrow | 10 Disc, Minimum 35 HP, Minimum 280 Kg | Subsidy: General farmer:50% or Max.of Rs26100 ; SC&ST farmer:90% or Max. of Rs.46980 whichever is less |
| 25 | | 11 Disc, Minimum 35 HP, Minimum 310 Kg | Subsidy: General farmer:50% or Max.of Rs24250 ; SC&ST farmer:90% or Max. of Rs.43650 whichever is less |
| 26 | | 14 Disc, Minimum 35 HP, Minimum 340 Kg, | Subsidy: General farmer:50% or Max.of Rs30375 ; SC&ST farmer:90% or Max. of Rs.54675 whichever is less |
| 27 | Cultivators | Without Spring, Light, 5Tynes, Minimum 18HP, Minimum 125Kg, | Subsidy: General farmer:50% or Max.of Rs10000 ; SC&ST farmer:90% or Max. of Rs.18000 whichever is less |
| 28 | | Without Spring, Heavy, 9Tynes, Minimum 35HP, Minimum 225Kg, | Subsidy: General farmer:50% or Max.of Rs13050 ; SC&ST farmer:90% or Max. of Rs.23490 whichever is less |
| 29 | | Without Spring, Duck Foot Type Bar Point Heavy Duty, 5Tynes, Minimum 35HP, Minimum 165Kg, | Subsidy: General farmer:50% or Max.of Rs13950 ; SC&ST farmer:90% or Max. of Rs.25110 whichever is less |
| 30 | | Without Spring, Duck Foot Type Bar Point Heavy Duty, 7Tynes, Minimum 35HP, Minimum 170Kg, | Subsidy: General farmer:50% or Max.of Rs17000 ; SC&ST farmer:90% or Max. of Rs.30600 whichever is less |
| 31 | | With Spring, Heavy, 9Tynes, Minimum 35HP, Minimum 250Kg, | Subsidy: General farmer:50% or Max.of Rs15000 ; SC&ST farmer:90% or Max. of Rs.27000 whichever is less |
| 32 | | With Spring, Medium, 7Tynes, Minimum 35HP, Minimum170Kg, | Subsidy: General farmer:50% or Max.of Rs17595 ; SC&ST farmer:90% or Max. of Rs.31671 whichever is less |
| 33 | Tractor Drawn Leveller Blade | Leveller Blade Minimum 5 feet, 20HP, 100 Kg, | Subsidy: General farmer:50% or Max.of Rs9450 ; SC&ST farmer:90% or Max. of Rs.17010 whichever is less |
| 34 | | Leveller Blade Minimum 6.5 feet, 35HP, 140 Kg, | Subsidy: General farmer:50% or Max.of Rs10500; SC&ST farmer:90% or Max. of Rs.18900 whichever is less |
| 35 | | Leveller Blade Minimum 7.0 feet, 35HP, 150 Kg, | Subsidy: General farmer:50% or Max.of Rs10000 ; SC&ST farmer:90% or Max. of Rs.18000 whichever is less |
| 36 | Wet Land Cage Wheel with Puddler | Single Cage Wheel With Disc Puddler,One set of puddler made of 12discs of 450mm diameter, 35HP, 320Kg | Subsidy: General farmer:50% or Max.of Rs19000 ; SC&ST farmer:90% or Max. of Rs.34200 whichever is less |
| 37 | | Double cage wheel, One set of puddler wheel made of MS flat or angle, 35HP, 225Kg, | Subsidy: General farmer:50% or Max.of Rs15000 ; SC&ST farmer:90% or Max. of Rs.27000 whichever is less |
| 38 | | Double cage wheel with peg leveller, One set of puddler wheel made of MS flat or angle, 35HP, 315Kg, | Subsidy: General farmer:50% or Max.of Rs19500 ; SC&ST farmer:90% or Max. of Rs.35100 whichever is less |
| 39 | Tractor Drawn Blade Harrow | Blade harrow of 5.5 feet length, 35HP, 140Kg, | Subsidy: General farmer:50% or Max.of Rs7750; SC&ST farmer:90% or Max. of Rs.13950 whichever is less |
| 40 | | Blade harrow of 6.5 feet length, 35HP, 150Kg, | Subsidy: General farmer:50% or Max.of Rs9775 ; SC&ST farmer:90% or Max. of Rs.17595 whichever is less |
| 41 | Tractor operated Laser Guided Land Leveller | With 50 HP Tractor Prime Mover, Class I Laser Diode(780 nm), Accuracy upto 50 Deg.C, IPX6 Standard, Laser Beam with 360 Degree, IP 68 Standard with 5 Channels | Subsidy limited to Maximum of Rs. 100000 for all farmers |

| S. No. | Implement type | Implement Specifications | Subsidy Rates |
|---|---|---|---|
| 42 | Paddy Transplanter | Self Propelled Riding type (split float), 6-8 rows, 16-22 HP Diesel/petrol Engine | subsidy limited to Maximum of Rs.100000 for all farmers |
| 43 | | Self Propelled Riding type(common float), 8 rows, 3-4 HP Diesel/ Petrol Engine | Subsidy: General farmer:50% or Max.of Rs85000 ; SC&ST farmer:90% or Max. of Rs.100000 whichever is less. |
| 44 | | Self Propelled Walk behind type ,4- 6 rows, 2-4.0 HP Petrol/ Diesel Engine | subsidy limited to Maximum of Rs.100000 for all farmers |
| 45 | Tractor Drawn Furrow Opener / Ridger / Bund Former | Three furrow opener, Minimum 35HP, Furrow Opener/Ridger made of 10 gauge sheet, 175Kg, | Subsidy: General farmer:50% or Max.of Rs.15000 ; SC&ST farmer:90% or Max. of Rs.27000, whichever is less. |
| 46 | | Five furrow opener, Minimum 35HP, Furrow Opener/Ridger made of 10 gauge sheet, 290 Kg, | Subsidy: General farmer:50% or Max.of Rs.17250 ; SC&ST farmer:90% or Max. of Rs.31050, whichever is less. |
| 47 | Seed cum Fertiliser Drill | 5 tynes Rigid, Tractor 22 HP & Minimum 90 Kg | Subsidy: General farmer:50% or Max.of Rs.18900 ; SC&ST farmer:90% or Max. of Rs.34020 whichever is less. |
| 48 | | 6-7 tynes Rigid, Tractor 35 HP & 140 Kg | Subsidy: General farmer:50% or Max.of Rs.23400 ; SC&ST farmer:90% or Max. of Rs.42120 whichever is less. |
| 49 | | 6-8 tynes Spring, Tractor 35 HP & 180Kg | Subsidy: General farmer:50% or Max.of Rs.26100 ; SC&ST farmer:90% or Max. of Rs.46980 whichever is less. |
| 50 | | 9 tynes Spring, Tractor 35 HP & 225 Kg | Subsidy: General farmer:50% or Max.of Rs.26500 ; SC&ST farmer:90% or Max. of Rs.47700 whichever is less. |
| 51 | | 9 tynes Rigid , Tractor 35 HP & 200 Kg | Subsidy: General farmer:50% or Max.of Rs28000 ; SC&ST farmer:90% or Max. of Rs.50400 whichever is less. |
| 52 | Pneumatic/Vaccum Precision Planter | 4 Rows, Minimum Tractor 40HP, Minimum Weight 180 Kg, | subsidy limited to Maximum of Rs.100000 for all farmers |
| 53 | Zero Till Drill | 9 Rows, Minimum Tractor 35HP, Minimum Weight 250 Kg | Subsidy: General farmer:50% or Max.of Rs. 30000 ; SC&ST farmer:90% or Max. of Rs.54000 whichever is less. |
| 54 | | 11 Rows, Minimum Tractor 35HP, Minimum Weight 280 Kg | Subsidy: General farmer:50% or Max.of Rs.31000 ; SC&ST farmer:90% or Max. of Rs.55800 whichever is less. |
| 55 | Roto Till Drill | Roto till drill (Seed drill with rotavator), 35HP, 36 Blades | Subsidy: General farmer:50% or Max.of Rs.75000 ; SC&ST farmer:90% or Max. of Rs.100000 whichever is less. |
| 56 | Fertilizer Broadcaster | Minimum Specification Output capacity 20 Kg/hr: With, Minimum Tractor 35HP, | Subsidy: General farmer:50% or Max.of Rs.13770 ; SC&ST farmer:90% or Max. of Rs.24786 whichever is less. |
| 57 | Power Operated Grass/Weed Slasher (Power Weeder)/Brush Cutter | Brush cutters/Slasher,Electric motor, 1.5HP, | Subsidy: General farmer:50% or Max.of Rs. 17500 ; SC&ST farmer:90% or Max. of Rs.31500 whichever is less. |
| 58 | | Brush cutters/Slasher,Petrol Engine , 1.5HP, | Subsidy: General farmer:50% or Max.of Rs8748 ; SC&ST farmer:90% or Max. of Rs.15743 whichever is less. |
| 59 | | Brush cutters/Slasher,Petrol Engine, 2.1HP, | Subsidy: General farmer:50% or Max.of Rs9130 ; SC&ST farmer:90% or Max. of Rs.16434 whichever is less. |
| 60 | | Self Propelled Rotary weeder/Slasher(Power Weeder),Diesel Engine, 3-6.5HP | Subsidy: General farmer:50% or Max.of Rs15000 ; SC&ST farmer:90% or Max. of Rs.27000 whicever is less. |
| 61 | | Self Propelled Rotary weeder/Slasher(Power Weeder), Petrol Engine, 3-6.5HP | Subsidy: General farmer:50% or Max.of Rs25000 ; SC&ST farmer:90% or Max. of Rs.45000 whichever is less. |
| 62 | | Self Propelled Rotary weeder for paddy (power Weeder)two row. Petrol Engine. 1.75-2.2HP 2/4 stroke engine | Subsidy: General farmer:50% or Max.of Rs13500: SC&ST farmer:90% or Max. of Rs.24300 whichever is less. |
| 63 | | Self Propelled multi Purpose intercultivator. Petrol/Diesel engine. 4-6HP | Subsidy: General farmer:50% or Max.of Rs33200 ; SC&ST farmer:90% or Max. of Rs.59760 whichever is less. |

